ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತಮೂರನೆಯ ಅಧಿವೇಶನ

ಗುರುವಾರ, ದಿನಾಂಕ: 4ನೇ ಫೆಬ್ರುವರಿ, 2021

ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಬರುವ ಕೆರೆಗಳ ಕುರಿತು

ಶ್ರೀ ಎನ್. ಅಪ್ಪಾಜಿಗೌಡ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ):-

335(459) ಮಾನ್ಯ ಮುಖ್ಯಮಂತ್ರಿಗಳು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಬರುವ ಕೆರೆಗಳಾವುವು; ಸರ್ವೆ ನಂ., ಅವುಗಳ ವಿಸ್ತೀರ್ಣ, ಕ್ಯಾಚ್‌ಮೆಂಟ್ ಪ್ರದೇಶ ಮುಂತಾದ ವಿವರಗಳನ್ನು ಸರ್ವೆ ನಂಬರ್, ವಾರ್ಡ್‌ವಾರು, ಮತಕ್ಷೇತ್ರವಾರು ವಿವರ ನೀಡುವುದು;

(ಆ) ಪಾಲಿಕೆಯ ಕೆರೆಗಳು ಒತ್ತುವರಿಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಯಾವ ಕೆರೆಗಳು ಎಷ್ಟು ಒತ್ತುವರಿಯಾಗಿವೆ; ಒತ್ತುವರಿ ಮಾಡಿರುವವರ ವಿರುದ್ಧ ಕೈಗೊಂಡಿರುವ ಕ್ರಮಗಳೇನು; ಯಾರು, ಯಾವ ಸರ್ವೆ ನಂಬರುಗಳಲ್ಲಿ ಎಷ್ಟು ಕ್ಷೇತ್ರವನ್ನು ಒತ್ತುವರಿ ಮಾಡಲಾಗಿದೆ; (ಸಂಪೂರ್ಣ ವಿವರಗಳನ್ನು ವಾರ್ಡ್‌ವಾರು, ಮತಕ್ಷೇತ್ರವಾರು ನೀಡುವುದು)

(ಇ) ಕೆರೆಗಳ ಒತ್ತುವರಿಯನ್ನು ತೆರವುಗೊಳಿಸಿ ನಿಗಧಿತ ವಿಸ್ತೀರ್ಣದಂತೆ ತಡೆಗೋಡೆಗಳನ್ನು ಹಾಕಿ ಸಂರಕ್ಷಣೆ ಮಾಡಿ ಅಭಿವೃದ್ಧಿಪಡಿಸುವ ಉದ್ದೇಶ ಸರ್ಕಾರಕ್ಕಿದೆಯೇ; ಹಾಗಿದ್ದಲ್ಲಿ, ಸರ್ಕಾರದಿಂದ ಯಾವಾಗ ಕ್ರಮ ಕೈಗೊಳ್ಳಲಾಗುವುದು;

(ಈ) ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಗೆ ವಿವಿಧ ಮೂಲಗಳಿಂದ ಸಂಗ್ರಹವಾಗಬೇಕಾದ/ಸಂಗ್ರಹವಾಗುವ ಪ್ರತಿ ತಿಂಗಳ ಆದಾಯವೆಷ್ಟು? (ಪ್ರತ್ಯೇಕವಾಗಿ ವಿವರ ನೀಡುವುದು)